೧

# ಡೆವೆಲಪಿಂಗ್ ಮೆಟೀರಿಯಲ್ಸ್ ಫಾರ್ ಲಾಂಗ್ವೇಜ್ ಟೀಚಿಂಗ್
# – ಬ್ರಿಯಾನ್ ಟಾಮ್‌ಲಿನ್‌ಸನ್

– ವಂದನಾ ಪುರಿ




ಸಂಪಾದನೆ: ಬ್ರಿಯಾನ್ ಟಾಮ್‌ಲಿನ್‌ಸನ್
ಬ್ಲೂಮ್ಸ್‌ಬೆರಿ, ಲಂಡನ್
ಮೊದಲ ಮುದ್ರಣ: (2003) 2013
ಐಎಸ್‌ಬಿಎನ್: ಎಚ್‌ಬಿ: 978–0–8264–5918–3
ಪಿಬಿ: 978–0–8264–5917–6

**Developing Materials for Language Teaching Edited by Brian Tomlinson**

ಸಾರಾಂಶ: ಶಿಕ್ಷಕರು ಭಾಷಾಬೋಧನೆಯನ್ನು ಮಾಡುವಾಗ ಬಳಸಬಹುದಾದ ಕಲಿಕಾ ಸಾಮಗ್ರಿಗಳ ತಯಾರಿಕೆಯ ಬಗ್ಗೆ ಈ ಪುಸ್ತಕದಲ್ಲಿ ಪ್ರಸ್ತಾವಿಸಲಾಗಿದೆ. ವಿವಿಧ ಭಾಷೆಗಳ ಲೇಖಕರು ಇಲ್ಲಿ ಭಾಷಾಶಿಕ್ಷಕರಿಗೆ

**ಕಲಿಕಾ ಸಾಮಗ್ರಿಗಳನ್ನು ಸಾಂಪ್ರದಾಯಿಕ ವಿಧಾನದಿಂದ ಪ್ರಸ್ತುತ ಕಂಪ್ಯೂಟರ್ ಆಧಾರಿತವಾದ ಬೋಧನೆಯವರೆಗೂ ಹೇಗೆ ತಯಾರಿಸಬಹುದು ಎಂದು ತಿಳಿಸಲಾಗಿದೆ.**

**ಪ್ರಮುಖಪದಗಳು: ಕಲಿಕಾ ಸಾಮಗ್ರಿಯ ಅಭಿವೃದ್ಧಿ– developing learning materials, ಭಾಷಾ ಬೋಧನೆ– Language Teaching, ಮುದ್ರಣ ಸಾಮಗ್ರಿ– printing material.**

* * *

ಅನೇಕ ಪುಸ್ತಕಗಳು, ಭಾಷಾಕಲಿಕಾ ಸಾಮಗ್ರಿಗಳ ಅಭಿವೃದ್ಧಿ ಕ್ಷೇತ್ರದ ಪ್ರಾಮುಖ್ಯವನ್ನು ಎತ್ತಿತೋರಿಸಿವೆ. ಆದಾಗ್ಯೂ, ಈ ಪುಸ್ತಕವು ಬೇರೆಯವುಗಳಿಗಿಂತ ಭಿನ್ನವಾಗಿದೆ, ಏಕೆಂದರೆ ಇದು ಭಾಷಾ ಅಧ್ಯಯನದಲ್ಲಿ ಕಲಿಕಾ ಸಾಮಗ್ರಿಗಳ ಅಭಿವೃದ್ಧಿಯ ಕ್ಷೇತ್ರದಲ್ಲಿನ ಮುಖ್ಯಾಂಶಗಳು ಮತ್ತು ಸಮಸ್ಯೆಗಳ ಸಮಗ್ರ ಗ್ರಹಿಕೆಯನ್ನು ಒದಗಿಸುತ್ತದೆ. ಆದರೆ ಇದು ವಿಷಯದ ಪ್ರಸ್ತುತ ಬೆಳವಣಿಗೆಗಳನ್ನು ಪ್ರಪಂಚದಾದ್ಯಂತ ಭಾಷಾಕಲಿಕಾ ಸಾಮಗ್ರಿಗಳನ್ನು ಅಭಿವೃದ್ಧಿಗೊಳಿಸುವವರು ಮತ್ತು ಬಳಕೆದಾರರ ದೃಷ್ಟಿಯನ್ನು ಒಳಗೊಂಡಿದೆ. ಅಲ್ಲದೆ, ಇಂಗ್ಲಿಷಿನ ಜೊತೆಗೆ, ಸ್ಪ್ಯಾನಿಷ್, ಇಟಾಲಿಯನ್ ಮತ್ತು ಜಪಾನೀಸ್‌ನಂತಹ ಇತರ ಭಾಷೆಗಳ ದೃಷ್ಟಿಕೋನದಿಂದ ಭಾಷಾಬೋಧನೆಗೆ ಕಲಿಕಾ ಸಾಮಗ್ರಿಗಳ ಅಭಿವೃದ್ಧಿಯನ್ನು ಈ ಪುಸ್ತಕವು ಪರಿಶೀಲಿಸುತ್ತದೆ. ಈ ಪುಸ್ತಕದ ಲೇಖಕರು ಇಂಗ್ಲಿಷ್ ಭಾಷೆಯನ್ನು ಮಾತೃಭಾಷೆಯಾಗಿ ಹೊಂದಿದವರು ಮತ್ತು ಹೊಂದಿಲ್ಲದವರಾಗಿದ್ದಾರೆ. ಅವರೆಲ್ಲ ಹನ್ನೊಂದು ವಿವಿಧ ದೇಶಗಳವರಾಗಿದ್ದಾರೆ ಮತ್ತು ವಿವಿಧ ಭಾಷೆಗಳನ್ನು ಮಾತನಾಡುತ್ತಾರೆ, ದ್ವಿತೀಯಭಾಷೆ ಅಥವಾ ವಿದೇಶಿ ಭಾಷಾಶಿಕ್ಷಕರಾಗಿ ಅನುಭವ ಹೊಂದಿದ್ದಾರೆ, ದ್ವಿತೀಯ ಭಾಷಾಕಲಿಕಾ ಸಾಮಗ್ರಿಗಳನ್ನು ಅಭಿವೃದ್ಧಿಪಡಿಸಲು ಸಹಕರಿಸಿದ್ದಾರೆ ಮತ್ತು ಭಾಷಾಶಾಸ್ತ್ರದ ವರ್ತಮಾನದ ಪ್ರವೃತ್ತಿಗಳೊಂದಿಗೆ ಸದಾ ಸಂಪರ್ಕದಲ್ಲಿದ್ದಾರೆ.

ಈ ಪುಸ್ತಕದಲ್ಲಿ ಅಭಿವೃದ್ಧಿಯ ಪ್ರಕ್ರಿಯೆಗಳು, ಮೌಲ್ಯಮಾಪನ ಮತ್ತು ಕಲಿಕಾ ಸಾಮಗ್ರಿಗಳ ಬರವಣಿಗೆಯ ತತ್ತ್ವಗಳು ಮತ್ತು ಕಾರ್ಯವಿಧಾನಗಳ ಜೊತೆಗೆ ಶಿಕ್ಷಕರ ವೈಯಕ್ತಿಕ ಮತ್ತು ವೃತ್ತಿಪರ ಅಭಿವೃದ್ಧಿಯ ಬಗ್ಗೆ ಪ್ರಸ್ತಾವಿಸಲಾಗಿದೆ. ಪುಸ್ತಕದಲ್ಲಿ ಐದು ಭಾಗಗಳಿವೆ:

* ಕಲಿಕಾ ಸಾಮಗ್ರಿಗಳ ಮೌಲ್ಯಮಾಪನ ಮತ್ತು ರೂಪಾಂತರ
* ಕಲಿಕಾ ಸಾಮಗ್ರಿಗಳ ಅಭಿವೃದ್ಧಿಯ ತತ್ತ್ವಗಳು ಮತ್ತು ಕಾರ್ಯವಿಧಾನಗಳು (ಚೌಕಟ್ಟುಗಳು, ಬರವಣಿಗೆ, ಪ್ರಕಟಣೆ, ಮಾನವೀಕರಣ, ದೃಶ್ಯಾಂಶಗಳು, ವಿದ್ಯುನ್ಮಾನ ಸಾಮಗ್ರಿಗಳು ಮತ್ತು ಅಭ್ಯಾಸ ಪುಸ್ತಕಕ್ಕೆ ಸೃಷ್ಟಿಶೀಲ ವಿಧಾನಗಳು)
* ಉದ್ದೇಶಿತ ಗುಂಪುಗಳಿಗೆ (ಪ್ರಾಥಮಿಕ ಶಾಲೆಗಳು, ದ್ವಿತೀಯಭಾಷೆ,

ಆರಂಭಿಕವಯಸ್ಕರು, ವಯಸ್ಕರು ಇತ್ಯಾದಿ) ಕಲಿಕಾ ಸಾಮಗ್ರಿಗಳನ್ನು ಅಭಿವೃದ್ಧಿಪಡಿಸುವುದು.

* ನಿರ್ದಿಷ್ಟ ರೀತಿಯ ಕಲಿಕಾ ಸಾಮಗ್ರಿಗಳನ್ನು ಅಭಿವೃದ್ಧಿಪಡಿಸುವುದು (ವ್ಯಾಕರಣ, ಓದುವಿಕೆ, ಮಾತನಾಡುವುದು, ಶಬ್ದಸಂಪತ್ತು, ಸಾಹಿತ್ಯ, ಭಾಷಾ ಅರಿವು, ಸಾಂಸ್ಕೃತಿಕ ಅರಿವು, ಇತ್ಯಾದಿ)
* ಕಲಿಕಾ ಸಾಮಗ್ರಿಗಳನ್ನು ಅಭಿವೃದ್ಧಿಪಡಿಸಲು ತರಬೇತಿ (ಶಿಕ್ಷಕತರಬೇತಿ, ಕಲಿಕಾ ಸಾಮಗ್ರಿಗಳ ಅಭಿವೃದ್ಧಿ, ಪಠ್ಯಪುಸ್ತಕದ ಬರವಣಿಗೆ, ಇತ್ಯಾದಿ).

ಭಾಷಾಕಲಿಕಾ ಸಾಮಗ್ರಿಗಳನ್ನು ಕುರಿತ ಹೆಚ್ಚಿನ ಪುಸ್ತಕಗಳು ಮುದ್ರಣ ಸಾಮಗ್ರಿಗಳ ಮೇಲೆ ಮಾತ್ರ ಕೇಂದ್ರೀಕರಿಸುತ್ತವೆ, ಆದರೆ ಈ ಪುಸ್ತಕವು ದೃಶ್ಯ, ಶ್ರವ್ಯ, ಗಣಕಯಂತ್ರ, ಅಂತರ್ಜಾಲ ಮತ್ತು ಪ್ರತ್ಯಕ್ಷ ಕಲಿಕಾ ಸಾಮಗ್ರಿಗಳೊಂದಿಗೆ ವ್ಯವಹರಿಸುತ್ತದೆ. ಪುಸ್ತಕದಲ್ಲಿನ ಕೆಲವು ಲೇಖನಗಳು ರಾಷ್ಟ್ರೀಯ ಮತ್ತು ಸಾಂಸ್ಥಿಕ ಪಠ್ಯಪುಸ್ತಕದ ಅಗತ್ಯಗಳನ್ನು ಚರ್ಚಿಸುತ್ತವೆ (ಅಧ್ಯಾಯ ೩, ೩೦). ಇತರ ಅಧ್ಯಾಯಗಳು ಕಲಿಕಾ ಸಾಮಗ್ರಿಗಳ ವಾಣಿಜ್ಯ ಉತ್ಪಾದನೆಗೆ ಅಗತ್ಯವಾದ ಹೊಂದಾಣಿಕೆಗಳ ಮೇಲೆ ಕೇಂದ್ರೀಕರಿಸುತ್ತವೆ (ಅಧ್ಯಾಯಗಳು ೭, ೮, ೧೫, ೧೯). ಹಲವು ಅಧ್ಯಾಯಗಳು, ಶಿಕ್ಷಕರು ಹೇಗೆ ಸ್ವಲ್ಪ ತರಬೇತಿ, ಅನುಭವ ಮತ್ತು ಬೆಂಬಲದೊಂದಿಗೆ ಉತ್ತಮ ಕಲಿಕಾ ಸಾಮಗ್ರಿಗಳ ಬರಹಗಾರರಾಗಬಹುದು ಎಂಬುದನ್ನು ಕುರಿತು ತಿಳಿಸುತ್ತವೆ. (ಅಧ್ಯಾಯಗಳು ೬, ೨೭, ೩೦, ೩೧). ಕೆಲವು ಅಧ್ಯಾಯಗಳು ಕಲಿಕಾ ಸಾಮಗ್ರಿಗಳ ತಯಾರಿಯಲ್ಲಿನ ತಪ್ಪುಗಳನ್ನು ತಪ್ಪಿಸುವ ವಿಧಾನಗಳನ್ನು ಸಹ ಸೂಚಿಸುತ್ತವೆ (ಅಧ್ಯಾಯಗಳು ೧, ೨, ೪, ೫). ಒಟ್ಟಾರೆಯಾಗಿ, ಈ ಸಂಪುಟವು ಪ್ರಪಂಚದಾದ್ಯಂತದ ಭಾಷೆಯ ಕಲಿಕಾ ಸಾಮಗ್ರಿಗಳ ಅಭಿವೃದ್ಧಿಯಲ್ಲಿನ ವರ್ತಮಾನದ ಪ್ರವೃತ್ತಿಗಳನ್ನು ಹುಡುಕುವ ಯಾರಿಗೆ ಬೇಕಾದರೂ ಎಲ್ಲ ಕಲಿಕಾ ಸಾಮಗ್ರಿಗಳು ದೊರೆಯುವ ಒಂದೇ ನಿಲುಗಡೆಯ ಅಂಗಡಿಯಾಗಿದೆ. ಇಲ್ಲಿ ನಮಗೆ ಬೇಕಿರುವ ಎಲ್ಲ ಅಗತ್ಯ ವಸ್ತುಗಳೂ ಸಿಗುತ್ತವೆ.

* * *

**ಚಿಂತನಾತ್ಮಕ ಪ್ರಶ್ನೆಗಳು:**

೧. ಭಾಷಾಶಿಕ್ಷಕರು ಬೋಧನಾ ಸಾಮಗ್ರಿಗಳನ್ನು ತಯಾರಿಸುವ ಅಗತ್ಯವಿದೆಯೇ?

೨. ಇದು ಎಲ್ಲ ಭಾಷಾಬೋಧನೆಯ ಶಿಕ್ಷಕರಿಗೂ ಅನ್ವಯಿಸುತ್ತದೆಯೇ? ಉದಾ. ಕನ್ನಡ, ಹಿಂದಿ, ಇಂಗ್ಲಿಷ್ ಇತ್ಯಾದಿ.

೩. ಕಲಿಕಾ ಸಾಮಗ್ರಿಗಳ ಬರಹಗಾರರು ಎಂದರೆ ಯಾರು?

**ವಂದನಾ ಪುರಿ:** ಇಲಿನಾಯ್ಸ್ ಯೂನಿವರ್ಸಿಟಿಯಿಂದ ಭಾಷಾಶಾಸ್ತ್ರದಲ್ಲಿ ಪಿಎಚ್.ಡಿ., ಪಡೆದಿದ್ದಾರೆ. ಅವರ ಸಂಶೋಧನಾ ಆಸಕ್ತಿಯು ಅಕೌಸ್ಟಿಕ್ ಫೋನೆಟಿಕ್ಸ್, ಇನ್ಟೋನೇಶನ್, ಪ್ರೊಸೊಡಿ, ಬೈಲಿಂಗ್ವಾಲಿಸಂ, ಇಂಗ್ಲಿಷ್ ಮತ್ತು ಸೋಶಿಯೋಲಿಂಗ್ವಿಸ್ಟಿಕ್ಸ್‌ಗಳನ್ನು ಒಳಗೊಂಡಿದೆ. ಈಗ ಅವರು ಉದಯಪುರದ ವಿದ್ಯಾಭವನ ಸೊಸೈಟಿಯ ಸಲಹೆಗಾರರಾಗಿದ್ದಾರೆ. vandana22puri@yahoo.com

**ಅನುವಾದ:** ಆನಂದ ಡಿ / **ಪರಿಶೀಲನೆ:** ನಾಗಮಣಿ ಎಸ್ ಎನ್

**ಮೂಲ:** Language and Language Teaching Volume 3 Number 1 Issue 5 January 2014.

